# ಪೂರ್ವ-ಪ್ರಾಥಮಿಕ ಮತ್ತು ಪ್ರಾಥಮಿಕ ತರಗತಿಗಳಲ್ಲಿ ಧ್ವನಿವಿಜ್ಞಾನದ ಅರಿವು ಮೂಡಿಸುವುದು

*ಐದು ವರ್ಷದ ಸಂಜನಾಳು ತನ್ನ ಸಹೋದರಿಯ ಬಗ್ಗೆ ಬರೆಯುತ್ತಾ ಮೇಜಿನ ಮುಂದೆ ಕುಳಿತಿದ್ದಾಳೆ. ಅವಳು ಈಗೀಗ ಓದಲು, ಬರೆಯಲು ಕಲಿಯುತ್ತಿದ್ದಾಳೆ, ಆದರೂ ಅವಳ ಅಮ್ಮನಿಗೆ ಏನಾದರೂ ಬರೆದು ತೋರಿಸಲು ಖುಷಿಪಡುತ್ತಾಳೆ. "ಅಂಜಲಿಒಳಯವ ಳುನನಗೆಳತ" ಎಂದು ಬರೆದಳು. ಅವಳ ತಾಯಿಯು ಅದನ್ನು ಓರೆನೋಟದಲ್ಲಿ ನೋಡಿ ನಸುನಗುತ್ತಾ ಅರ್ಥಮಾಡಿಕೊಂಡು ಈ ರೀತಿ ಓದಿದರು, "ಅಂಜಲಿ ಒಳ್ಳೆಯವಳು. ಹಾಗಾಗಿ, ಅವಳು ನನ್ನ ಗೆಳತಿ."*

"ಎಷ್ಟು ಚೆನ್ನಾಗಿ ಬರೆದಿದ್ದೀಯಾ" ಎಂದು ಮೆಚ್ಚುತ್ತಾ, ಸಂಜನಾಳಿಗೆ, "ಅಂಜಲಿದೊಂದು ಚಿತ್ರ ಬಿಡಿಸ್ತೀಯಾ?" ಎಂದು ಕೇಳಿದರು.

ಸಂಜನಾಳಿಗೆ ಚೆನ್ನಾಗಿ ಕಲಿತವರಂತೆ ಪದಗಳನ್ನು ಸರಿಯಾಗಿ ಬರೆಯಲು ಇನ್ನೂ ಬರುವುದಿಲ್ಲ. ಸಂಜನಾಳು ಪದಗಳನ್ನು ಸೇರಿಸಿ ಕಲಸುಮಲಸು ಮಾಡಿ ಬರೆಯುವುದನ್ನು ನೋಡಲು ಆಸಕ್ತಿಕರವಾಗಿದೆ: "ಅಂಜಲಿಒಳಯವಳು" ಮತ್ತು "ನನಗೆಳತ". ಅವಳು ಏಕೆ ಹೀಗೆ ಬರೆಯುತ್ತಾಳೆ?

ನಾವು ಪದಗಳನ್ನು ಬರೆಯುತ್ತೇವೆ, ಆದರೆ ಮಾತನಾಡುವಾಗ ಅಡೆತಡೆಯಿಲ್ಲದ "ಮಾತಿನ ಓಘ"ದಲ್ಲಿ ಪದಗುಚ್ಛಗಳನ್ನು ಹೇಳುತ್ತೇವೆ, ಅದರಲ್ಲಿ ಪದಗಳು ಮಿಶ್ರಿತಗೊಳ್ಳುತ್ತವೆ. "ಅಂಜಲಿ ತುಂಬಾ ಒಳ್ಳೆಯವಳು. ಹಾಗಾಗಿ, ಅವಳು ನನ್ನ ಗೆಳತಿ" ಎಂಬ ವಾಕ್ಯಗಳನ್ನು ಜೋರಾಗಿ ಹೇಳೋಣ, ಆಗ ಎಲ್ಲಿ ನಿಲ್ಲಿಸುತ್ತೇವೆ, ಎಲ್ಲಿ ಪದಗಳು ಒಂದಕ್ಕೊಂದು ಮಿಶ್ರಿತಗೊಳ್ಳುತ್ತವೆ?

ಇನ್ನೊಂದು ವಾಕ್ಯವನ್ನು ನೋಡೋಣ.

"ನಾನು ಮನೆಗೆ ಹೋಗುವುದಿಲ್ಲ"ಎಂಬ ವಾಕ್ಯವನ್ನು, ಮಾತನಾಡುವಾಗ ಹೇಳುವಂತೆ ಹೇಳಲು ಪ್ರಯತ್ನಿಸಿ. ಮಗುವಿಗೆ ಅದು ಈ ರೀತಿ ಕೇಳಿಸಬಹುದು, "ನಾನ್ಮನೆಗೋಗೊದಿಲ್ಲ"

ಮಕ್ಕಳು ತಮ್ಮ ಸುತ್ತಮುತ್ತ ಮಾತನಾಡುವ ಭಾಷೆ ಕಲಿಯುವಾಗ, ಮಾತು ಶಬ್ದದ ಸಣ್ಣ ಸಣ್ಣ ಘಟಕಗಳಿಂದ ರೂಪುಗೊಂಡಿದೆ ಎಂಬುದರ ಅರಿವಿಲ್ಲದಿರಬಹುದು. ಮಾತನಾಡುವ ಭಾಷೆಯನ್ನು ಸಣ್ಣ ಸಣ್ಣ ಘಟಕಗಳಾಗಿ ವಿಭಾಗಿಸಬಹುದು, ಮತ್ತು ಈ ಸಣ್ಣ ಸಣ್ಣ ಘಟಕಗಳನ್ನು ಕುಶಲತೆಯಿಂದ ಬಳಸಿ ಜೋಡಿಸಿ ಪದಗಳನ್ನು ಮತ್ತು ವಾಕ್ಯಗಳನ್ನು ರೂಪಿಸಬಹುದು ಎಂಬುದರ ಅರಿವನ್ನು ಧ್ವನಿವಿಜ್ಞಾನದ ಅರಿವು (Phonological Awareness) ಎನ್ನುತ್ತಾರೆ (ಯೂಪ್ ಮತ್ತು ಯೂಪ್, 2000).

ಶಬ್ದಗಳನ್ನು (sounds) ಮತ್ತು ಸಂಕೇತಗಳನ್ನು (symbols) ಜೋಡಿಸುವ ಸಾಮರ್ಥ್ಯದ ಮೇಲೆ ಓದುವುದು ಮತ್ತು ಬರೆಯುವುದು ಅವಲಂಬಿತವಾಗಿವೆ. ವಿವಿಧ ಶಬ್ದಗಳನ್ನು ಪ್ರತಿನಿಧಿಸುವ ಸಂಕೇತಗಳನ್ನು ಓದಲು ಕಲಿಯುವುದಕ್ಕೂ ಮೊದಲೇ, ಮಾತಿನ ಭಾಷೆಯಲ್ಲಿ ಶಬ್ದಗಳು ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ಮಕ್ಕಳು ಅರಿತುಕೊಳ್ಳುವ ಅವಶ್ಯಕತೆ ಇದೆ: ವಾಕ್ಯಗಳು ಪದಗಳನ್ನೊಳಗೊಂಡಿವೆ, ಮತ್ತು ಪದಗಳು ಶಬ್ದಗಳ ಸಣ್ಣ ಸಣ್ಣ ಉಪ-ಘಟಕಗಳನ್ನೊಳಗೊಂಡಿವೆ. ಧ್ವನಿವಿಜ್ಞಾನದ ಅರಿವು, ಓದಲು ಕಲಿಯುವುದಕ್ಕೆ ಅಡಿಪಾಯ.

ಧ್ವನಿವಿಜ್ಞಾನದ ಅರಿವು ಮಾತನಾಡುವ ಭಾಷೆಯ ಶಬ್ದವನ್ನು "ಕೇಳುವ" ಸಾಮರ್ಥ್ಯವನ್ನು ಸೂಚಿಸುತ್ತದೆ ಎಂಬುದನ್ನು ಒತ್ತಿ ಹೇಳಲು ಇಚ್ಛಿಸುತ್ತೇವೆ. ಧ್ವನಿವಿಜ್ಞಾನದ ಅರಿವಿನ ಬೆಳವಣಿಗೆಗೆ ಓದಲು ಮತ್ತು ಬರೆಯಲು ತಿಳಿದಿರಬೇಕಾದ ಅವಶ್ಯಕತೆಯಿಲ್ಲ. ಶಾಲಾ-ಪೂರ್ವ ವಯಸ್ಸಿನ ಮಕ್ಕಳೂ ಕೂಡ ಒಂದು ಹಂತದ ಧ್ವನಿವಿಜ್ಞಾನದ ಅರಿವನ್ನು ಬೆಳೆಸಿಕೊಳ್ಳಬಹುದು.

ಮಕ್ಕಳು ಧ್ವನಿವಿಜ್ಞಾನದ ಅರಿವನ್ನು ಶಬ್ದದ ದೊಡ್ಡ ಘಟಕದಿಂದ ಪ್ರಾರಂಭಿಸಿ ಸಣ್ಣ ಘಟಕದವರೆಗೆ ನಿರಂತರವಾಗಿ ಬೆಳೆಸಿಕೊಳ್ಳುತ್ತಾರೆ ಎಂದು ಆಂಗ್ಲ ಭಾಷೆಯಲ್ಲಿ ಬಳಸಿದ ಅಕ್ಷರಗಳ ಮೇಲೆ ನಡೆಸಿದ ಅಧ್ಯಯನಗಳು ಈ ಕೆಳಗಿನ ಚಿತ್ರದಲ್ಲಿರುವಂತೆ ತೋರಿಸಿವೆ (ಎಲರಿ, 2014).




ಚಿತ್ರ 1. ಮಕ್ಕಳಲ್ಲಿ ಧ್ವನಿವಿಜ್ಞಾನದ ಅರಿವಿನ ಬೆಳವಣಿಗೆ

ಮಾತನಾಡಿದ ವಾಕ್ಯಗಳಲ್ಲಿನ ಪ್ರತಿಯೊಂದು ಪದಗಳ ವ್ಯತ್ಯಾಸಗಳನ್ನು ಕಂಡುಕೊಳ್ಳುವುದು, ಮಕ್ಕಳು ಎದುರುಗೊಳ್ಳುವ ಮೊದಲ ಕೆಲಸ. ಈ ಲೇಖನದ ಪ್ರಾರಂಭದಲ್ಲಿನ ಉದಾಹರಣೆಯಲ್ಲಿ ತೋರಿಸಿದಂತೆ, ನಾವು ಪದಗಳನ್ನು ಮಿಶ್ರಿತಗೊಳಿಸಿ, ಪದಗುಚ್ಛ ಮಾಡಿ ಮಾತನಾಡುತ್ತೇವೆ. “ಮಳೆ ಬರ್ತಾಯಿದೆ, ಆದ್ರಿಂದ ನಮಗೆ ಛತ್ರಿ ಬೇಕು”, ಅಥವಾ “ಅವ್ಳು ಕುರ್ಚಿಮೇಲೆ ಕೂತಿದಾಳೆ” ಎಂಬ ಮಾತುಗಳಲ್ಲಿ ಪದಗಳು ಎಂಬ ಸುಸ್ಪಷ್ಟ ಘಟಕಗಳಿವೆ ಎಂಬುದನ್ನು ಚಿಕ್ಕ ಮಕ್ಕಳು ಮೊದಲು ಅರಿಯಬೇಕು. ಮುಂದೆ ಸ್ವಲ್ಪ ಸಮಯದಲ್ಲೇ ಅವರು, ಕೆಲವು ಪದಗಳು ಇತರೆ ಪದಗಳಂತೆ ಕೇಳಿಸುತ್ತವೆ ಎಂದು ಗುರುತಿಸಲು ಪ್ರಾರಂಭಿಸುತ್ತಾರೆ. ಉದಾಹರಣೆಗೆ, “ಜನ” ಮತ್ತು “ದನ” ಒಂದೇ ರೀತಿಯಾಗಿ ಕೇಳಿಸುತ್ತವೆ- ಅವು ಪ್ರಾಸಬದ್ಧವಾಗಿವೆ. ಹೆಚ್ಚಿನ ಬಾಲವಾಡಿಯ ಕಾರ್ಯಕ್ರಮಗಳು ತರಗತಿಯಲ್ಲಿ ಪ್ರಾಸಬದ್ಧ ಪದಗಳ ಬಳಕೆಯ ಮೂಲಕ ಈ ಧ್ವನಿವಿಜ್ಞಾನದ ಸೂಕ್ಷ್ಮತೆಯನ್ನು ಹೊರಗೆಡಹುತ್ತವೆ.

ಆದರೆ, ಧ್ವನಿವಿಜ್ಞಾನದ ಬೆಳವಣಿಗೆಯು ಈ ಹಂತದಲ್ಲಿನ್ನೂ ಪೂರ್ಣಗೊಂಡಿರುವುದಿಲ್ಲ. ಪದಗಳನ್ನು ಇನ್ನೂ ಚಿಕ್ಕ ಶಬ್ದಗಳಾಗಿ ಉಪ-ವಿಭಾಗಿಸಬಹುದು ಎಂದು ಇತರರ ಸಹಾಯದಿಂದ ಮಕ್ಕಳು ತಿಳಿದುಕೊಳ್ಳುತ್ತಾರೆ. ಉದಾಹರಣೆಗೆ, “ಪುಸ್ತಕ” ಎಂಬ ಪದವನ್ನು “ಪು-ಸ್ತ-ಕ” ಎಂದು ವಿಭಾಗಿಸಬಹುದು. ಈ ಉಪ-ಘಟಕಗಳು “ಅಕ್ಷರಗಳು.” ಚಿಕ್ಕ ಮಕ್ಕಳಿಗೆ ಇದು ತಿಳಿದಿರದಿದ್ದರೂ, ಓದು ಹಾಗೂ ಬರೆಯುವುದನ್ನು ಕಲಿಯಲು ಅವರಿಗೆ ಪದಗಳನ್ನು ಈ ರೀತಿ ಭಾಗಗಳಾಗಿ ವಿಭಾಗಿಸಲು ಸಾಧ್ಯವಾಗಬೇಕು. “ರುಚಿಕಾ” (ರು-ಚಿ-ಕಾ) ಎಂಬ ಪದದಲ್ಲಿ “ಗೀತಾ” (ಗೀ-ತಾ) ಎಂಬ ಪದಕ್ಕಿಂತಲೂ ಹೆಚ್ಚು ಭಾಗಗಳಿವೆ ಮತ್ತು ಇದರಲ್ಲಿ “ಜೈ”ಗಿಂತ ಹೆಚ್ಚಿನ ಭಾಗಗಳಿವೆ ಎಂದು ಅವರು ನಿಧಾನವಾಗಿ ಅರಿತುಕೊಳ್ಳಲು ಪ್ರಾರಂಭಿಸುತ್ತಾರೆ.

ನಂತರ, ಮಗುವು ಈ ಭಾಗಗಳನ್ನು ಇನ್ನೂ ಸಣ್ಣ ಭಾಗಗಳಾಗಿ ವಿಭಾಗಿಸಬಹುದು ಎಂದು ಇತರರ ಸಹಾಯದಿಂದ ತಿಳಿದುಕೊಳ್ಳುತ್ತದೆ. ಆಂಗ್ಲ ಭಾಷೆಯಲ್ಲಿ “Ru”ವನ್ನು /r/ ಮತ್ತು /u/ ಎಂಬ ಧ್ವನಿಮಾಗಳಾಗಿ (phonemes) ವಿಭಾಗಿಸದೆ ಬರೆಯಲು ಸಾಧ್ಯವಿಲ್ಲ. ಇದಲ್ಲದೆ ಬಹಳಷ್ಟು ಭಾರತೀಯ ಲಿಪಿಗಳಲ್ಲಿ ಈ ರೀತಿ ಶಬ್ದಗಳ ವ್ಯತ್ಯಾಸಗಳನ್ನು ಗುರುತಿಸಲು ಸಾಧ್ಯವಾದಾಗ ಓದಲು ಮತ್ತು ಬರೆಯಲು ಕಲಿತುಕೊಳ್ಳಲು ಸಹಾಯಕವಾಗುತ್ತದೆ.




ಚಿತ್ರ 2: ಪ್ರಾರಂಭಿಕ ಮತ್ತು ಅಂತ್ಯಾನುಪ್ರಾಸಗಳನ್ನು ಬಳಸಿ ಪದಗಳನ್ನು ರಚಿಸುವುದು.

ಪ್ರಾರಂಭಿಕ ಮತ್ತು ಅಂತ್ಯಾನುಪ್ರಾಸಗಳ ವ್ಯತ್ಯಾಸವನ್ನು ಗುರುತಿಸಲು ಸಾಧ್ಯವಾಗುವ ಮಾಧ್ಯಮಿಕ ಮಟ್ಟದ ಧ್ವನಿವಿಜ್ಞಾನದ ಅರಿವು, ಆಂಗ್ಲ ಲಿಪಿಯ ಓದು ಮತ್ತು ಬರಹವನ್ನು ಕಲಿಯಲು ಸಹಾಯಕವಾಗುತ್ತದೆ. ಪ್ರಾರಂಭಿಕ ಮತ್ತು ಅಂತ್ಯಾನುಪ್ರಾಸಗಳು ಎಂದರೇನು? ಒಂದು ಅಕ್ಷರದಲ್ಲಿರುವ ಸ್ವರ ಮತ್ತು ಅದನ್ನು ಅನುಸರಿಸುವುದೆಲ್ಲವೂ “ಅಂತ್ಯಾನುಪ್ರಾಸ”, ಮತ್ತು ಸ್ವರದ ಮೊದಲು ಬರುವುದೇ “ಪ್ರಾರಂಭಿಕ”. ಇದನ್ನು ಅರ್ಥಮಾಡಿಕೊಳ್ಳಲು ನಾವು ಇನ್ನೂ ಕೆಲವು ಉದಾಹರಣೆಗಳನ್ನು

ನೋಡೋಣ. "ಪಾಠ" ಎಂಬ ಪದದಲ್ಲಿ "ಅ" ಎನ್ನುವುದು, ಸ್ವರ. ಆದ್ದರಿಂದ "ಠ" ಎಂಬುದು ಅಂತ್ಯಾನುಪ್ರಾಸ (ಸ್ವರ ಮತ್ತು ಅದನ್ನು ಅನುಸರಿಸುವ ಅಕ್ಷರ). "ಪ್" ಎಂಬುದು, ಪ್ರಾರಂಭಿಕ (ಸ್ವರಕ್ಕಿಂತ ಮೊದಲು ಬರುವುದು). "ಗೀತಾ" ಹೆಸರಿನಲ್ಲಿ ಎರಡು ಅಕ್ಷರಗಳಿವೆ, "ಗೀ" ಮತ್ತು "ತಾ". "ಗೀ" ಯಲ್ಲಿ "ಈ" ಎಂಬುದು ಅಂತ್ಯಾನುಪ್ರಾಸ ಹಾಗೂ "ಗ್", ಪ್ರಾರಂಭಿಕ. "ತಾ"ದಲ್ಲಿ "ಆ" ಎನ್ನುವುದು, ಅಂತ್ಯಾನುಪ್ರಾಸ ಹಾಗೂ "ತ್", ಪ್ರಾರಂಭಿಕ ಘಟಕವಾಗಿದೆ.

ಪ್ರಾಸಗಳನ್ನು ಕಲಿಯುವುದರಿಂದ ಮಕ್ಕಳಿಗೆ ಏನು ಉಪಯೋಗ? ಉದಾಹರಣೆಗೆ, "at" ಎಂಬ ಪದದಲ್ಲಿನ ಅಂತ್ಯಾನುಪ್ರಾಸವು, "hat", "mat", "attack", "caterpillar" ಮುಂತಾದ ಇತರ ಪದಗಳನ್ನು ಓದಲು ಸಹಾಯಮಾಡುತ್ತದೆ. ನಮ್ಮ ಭಾರತೀಯ ಲಿಪಿಗಳು ಈ ರೀತಿಯ ಶಬ್ದಗಳನ್ನೊಳಗೊಂಡಿಲ್ಲವಾದ್ದರಿಂದ ಅವುಗಳನ್ನು ಓದುವುದನ್ನು ಕಲಿಯಲು ಈ ಮಟ್ಟದ ಅರಿವಿನ ಅವಶ್ಯಕತೆಯಿಲ್ಲ. ಹೆಚ್ಚಿನ ಭಾರತೀಯ ಲಿಪಿಗಳಲ್ಲಿ "cat" ಪದವನ್ನು "/k/" + "at"ಗೆ ಬದಲಾಗಿ, "ka" + "/t/" ಎಂದು ವಿಂಗಡಿಸಲಾಗುತ್ತದೆ.

ಆದ್ದರಿಂದ, ಮಕ್ಕಳು ಓದಲು ಹಾಗೂ ಬರೆಯಲು ಕಲಿಯುವ ಲಿಪಿಯ ಸ್ವಭಾವವು ಮುಂದೆ ಅವರು ಬೆಳೆಸಿಕೊಳ್ಳಬೇಕಾದ ಧ್ವನಿವಿಜ್ಞಾನದ ಅರಿವಿನ ಮೇಲೆ ಪ್ರಭಾವ ಬೀರಬಹುದು. ಅದರ ಜೊತೆಗೆ, ಮಕ್ಕಳಿಗೆ ಸರಾಗವಾಗಿ ಓದಲು ಮತ್ತು ಬರೆಯಲು ಇಲ್ಲಿ ವಿವರಿಸಿರುವ ಅನೇಕ ಹಂತಗಳ ಧ್ವನಿವಿಜ್ಞಾನದ ಅರಿವು ಅವಶ್ಯಕವಾಗಿದೆ ಎಂದು ದಶಕಗಳಿಂದ ವಿವಿಧ ರೀತಿಯ ಭಾಷೆಗಳ ಮೇಲೆ ನಡೆದಿರುವ ಅಧ್ಯಯನಗಳಿಂದ ಸ್ಪಷ್ಟವಾಗಿ ತಿಳಿದುಬಂದಿದೆ.

ಈ ಲೇಖನವು, ವಿಕಾಸಾತ್ಮಕ ನಿರಂತರತೆಯಾದ್ಯಂತ ಧ್ವನಿವಿಜ್ಞಾನದ ಅರಿವನ್ನು ಬೆಳೆಸಿಕೊಳ್ಳುವುದರ ವಿಧಾನಗಳನ್ನು ತಿಳಿಸಿಕೊಡುತ್ತದೆ[1]. ಇಲ್ಲಿ ಕೊಟ್ಟಿರುವ ಚಟುವಟಿಕೆಗಳು 3ರಿಂದ 8 ವರ್ಷದ ಮಕ್ಕಳಿಗೆ ಸೂಕ್ತವಾಗಿದ್ದರೂ ಕೆಲವು ಚಟುವಟಿಕೆಗಳು ಹೆಚ್ಚುಕಡಿಮೆ ನಿಗದಿತ ವಯಸ್ಸಿನ ಮಕ್ಕಳಿಗೆ ಉಪಯುಕ್ತವಾದವುಗಳು.

## ಧ್ವನಿವಿಜ್ಞಾನದ ಅರಿವನ್ನು ಬೆಳೆಸಲು ತರಗತಿಯ ಚಟುವಟಿಕೆಗಳು

ಈ ವಿಭಾಗದಲ್ಲಿ ನಾವು ಕೊಟ್ಟಿರುವ ಚಟುವಟಿಕೆಗಳನ್ನು ಮಕ್ಕಳು ಸ್ವತಂತ್ರವಾಗಿ ಮಾಡಬೇಕೆಂದು ನೀವು ನಿರೀಕ್ಷಿಸುವುದಕ್ಕೆ ಮೊದಲು, ಶಿಕ್ಷಕರು ಅವುಗಳನ್ನು ಮಾಡಿತೋರಿಸುವ ಸಲುವಾಗಿ ಮತ್ತು ಮಾರ್ಗದರ್ಶನದ ನಿಟ್ಟಿನಲ್ಲಿ, ಸಾಕಷ್ಟು ಸಮಯಾವಕಾಶ ಕೊಡಬೇಕು. ಚಟುವಟಿಕೆಯನ್ನು ಸಾಕಷ್ಟು ಬಾರಿ ಪುನರಾವರ್ತಿಸಿ, ನೀವು ಅವರಿಂದ ಏನನ್ನು ನಿರೀಕ್ಷಿಸುವಿರೆಂಬುದು ಮಕ್ಕಳಿಗೆ ಸರಿಯಾಗಿ ಪರಿಚಯವಾಗುವಂತೆ. ಮಾಡಿ. ನಂತರ ಅವರು ತಾವೇ ಸ್ವತಃ ಅದನ್ನು ಮಾಡುತ್ತಾರೆ.

### ಪದಗಳ ಬಗ್ಗೆ ಅರಿವು ಮೂಡಿಸುವುದು (3 – 4 ವರ್ಷದ ಮಕ್ಕಳಿಗೆ)

- **ಪದ ಚಪ್ಪಾಳೆ**: ಒಂದು ವಾಕ್ಯವನ್ನು ನಿಧಾನವಾಗಿ ಹೇಳಿ. ಮಕ್ಕಳು ಪ್ರತಿ ಪದಕ್ಕೂ ಚಪ್ಪಾಳೆ ತಟ್ಟಬೇಕು. ಮಕ್ಕಳ ಗಮನ ಸೆಳೆಯಲು ಮಕ್ಕಳ ಹೆಸರುಗಳನ್ನು ಸೇರಿಸಿ ಅಥವಾ ಆಸಕ್ತಿದಾಯಕ ವಾಕ್ಯಗಳನ್ನು ಹೇಳಿ (ಉದಾ: ರಾಮ ನಮ್ಮ ಮನೆಗೆ ಬಂದನು). ನಂತರ, ತಮ್ಮದೇ ವಾಕ್ಯಗಳನ್ನು ಹೇಳುವಂತೆ ಮಕ್ಕಳಿಗೆ ತಿಳಿಸಿ. ಅವರು ಹೇಳಿದ ವಾಕ್ಯದ ಪ್ರತಿ ಪದಕ್ಕೂ ಚಪ್ಪಾಳೆ ತಟ್ಟುವಂತೆ ತರಗತಿಗೆ ಸೂಚಿಸಿ. ತಾವು ಕೇಳಿದ ಪ್ರತಿ ಪದಕ್ಕೆ ಜಿಗಿಯುವಂತೆಯೂ ಮಕ್ಕಳಿಗೆ ಹೇಳಬಹುದು.

---

[1] ಆರಂಭಿಕ ಮತ್ತು ಅಂತ್ಯಾನುಪ್ರಾಸಗಳು ಬಹುತೇಕ ಇಂಗ್ಲೀಷ್ ಭಾಷೆಗೆ ಸಂಬಂಧಪಟ್ಟಿರುವುದರಿಂದ, ಅವುಗಳನ್ನು ಇಲ್ಲಿ ವಿವರಿಸಿರುವುದಿಲ್ಲ.

- **ಒಂದು ಪದವನ್ನು ಸೇರಿಸುವುದು/ಬದಲಾಯಿಸುವುದು**: ಪ್ರತಿ ಮಗುವೂ ಒಂದು ಪದವನ್ನು ಹೇಳುವಂತೆ ತಿಳಿಸಿ. ಮುಂದಿನ ಮಗು ಅದಕ್ಕೆ ಪದವೊಂದನ್ನು ಸೇರಿಸಿ, ವಾಕ್ಯವನ್ನಾಗಿಸುತ್ತದೆ. ಉದಾಹರಣೆಗೆ, ಒಂದು ಮಗು, "ನಾನು"ಎಂದು ಹೇಳಿದಾಗ, ಇನ್ನೊಂದು ಮಗು "ನಿನ್ನೆ", ಮತ್ತೊಂದು ಮಗು "ಚಕ್ಕುಲಿ" ಹಾಗೂ ಮುಂದಿನ ಮಗು "ತಿಂದೆ" ಎಂಬ ಪದಗಳನ್ನು ಸೇರಿಸುತ್ತಾ, "ನಾನು ನಿನ್ನೆ ಚಕ್ಕುಲಿ ತಿಂದೆ" ಎಂಬ ವಾಕ್ಯವನ್ನು ರಚಿಸುತ್ತವೆ.

ಕನ್ನಡದಲ್ಲಿ, ಉದಾಹರಣೆಗೆ, ಒಂದು ಮಗುವು, "ನಾನು" ಎಂಬ ಪದವನ್ನು ಹೇಳಿದಾಗ, ಮುಂದಿನ ಮಗು, "ನಾಳೆ" ಎಂಬ ಪದವನ್ನು ಹೇಳುತ್ತದೆ. ಮೂರನೆಯ ಮಗು, "ಸಂತೆಗೆ", ನಾಲ್ಕನೆಯ ಮಗುವು "ಹೋಗುತ್ತೇನೆ" ಎಂಬ ಪದಗಳನ್ನು ಸೇರಿಸಿ, ನಾನು ಸಂತೆಗೆ ಹೋಗುತ್ತೇನೆ ಎಂಬ ವಾಕ್ಯವು ರೂಪುಗೊಳ್ಳುತ್ತದೆ.

ಇದಕ್ಕೆ ಬದಲಾಗಿ, ನೀವು, ಒಂದು ವಾಕ್ಯದೊಂದಿಗೆ ಪ್ರಾರಂಭಿಸಬಹುದು. ಉದಾ: ನಾನು <u>ಸಂತೆಗೆ</u> ಹೋಗುತ್ತೇನೆ. ಮಕ್ಕಳು ಒಬ್ಬೊಬ್ಬರಾಗಿ ವಾಕ್ಯದಲ್ಲಿನ ಒಂದು ಪದವನ್ನು ಬದಲಾಯಿಸುತ್ತಾ ಹೋಗುತ್ತಾರೆ. ಉದಾ: ನಾನು <u>ಶಾಲೆಗೆ</u> ಹೋಗುತ್ತೇನೆ

- ಪದಗಳ ಲಕೋಟೆ: ಸಣ್ಣ ಚೀಟಿಗಳಲ್ಲಿ ಸರಳವಾದ ವಾಕ್ಯಗಳನ್ನು ಬರೆದಿಟ್ಟುಕೊಳ್ಳಿ. ಪ್ರತಿ ಮಗುವಿಗೂ ಒಂದು ಲಕೋಟೆ ಮತ್ತು ಕೆಲವು ಗುರುತಿನಬಿಲ್ಲೆಗಳನ್ನು (ಬಾಟಲಿಯ ಮುಚ್ಚಳಗಳು, ಸಣ್ಣ ಹರಳು ಕಲ್ಲುಗಳು, ಅಥವಾ ನಾಣ್ಯಗಳು) ನೀಡಿ. ನೀವು, ಪದಗಳ ನಡುವೆ ಅಂತರವಿರುವುದನ್ನು ಖಾತರಿಪಡಿಸಿಕೊಳ್ಳುತ್ತಾ, ವಾಕ್ಯವೊಂದನ್ನು ನಿಧಾನವಾಗಿ ಓದುವ ಪ್ರಕ್ರಿಯೆಯಲ್ಲಿ, ಪ್ರತಿ ಪದವನ್ನು ಹೇಳಿದಾಗಲೂ ಒಂದು ಗುರುತುಬಿಲ್ಲೆಯನ್ನು ಡಬ್ಬದೊಳಗೆ ಹಾಕುವಂತೆ ಮಕ್ಕಳಿಗೆ ತಿಳಿಸಿ. ಉದಾಹರಣೆಗೆ, "'ನಾನು ತಿನ್ನುತ್ತಿದ್ದೇನೆ', ಈ ವಾಕ್ಯದಲ್ಲಿ ಎಷ್ಟು ಪದಗಳನ್ನು ಕೇಳಿಸಿಕೊಳ್ಳುತ್ತಿದ್ದೀರಿ?" ಎಂಬುದಾಗಿ ಅವರನ್ನು ಪ್ರಶ್ನಿಸಿ. ನೀವು ಹೇಳುವ ಪ್ರತಿ ಪದಕ್ಕೂ ಒಂದೊಂದು ಗುರುತಿನಬಿಲ್ಲೆಯನ್ನು ಹೇಗೆ ಡಬ್ಬದೊಳಗೆ ಹಾಕುತ್ತೀರಿ ಎಂಬುದನ್ನು ಪ್ರತ್ಯಕ್ಷವಾಗಿ ಮಾಡಿ ತೋರಿಸಿ.

- **ಜಿಗಿಯುವ ಶಿಶುಗೀತೆಗಳು**: ಮಕ್ಕಳನ್ನು ಗುಂಪುಗಳಾಗಿ ವಿಂಗಡಿಸಿ. ನೆಲದ ಮೇಲೆ ವೃತ್ತಗಳನ್ನು (ಕನಿಷ್ಠ, ಒಂದೊಂದು ಗುಂಪಿನಲ್ಲಿರುವ ಮಕ್ಕಳ ಸಂಖ್ಯೆಯಷ್ಟು) ರಚಿಸಿ. ಪ್ರತಿ ಮಗುವೂ ಒಂದೊಂದು ವೃತ್ತದೊಳಗೆ ನಿಲ್ಲುವುದು. ನಂತರ ನೀವು ಹಾಡುವ, ಕೇಳಿಸುವ ಹಾಡಿನಲ್ಲಿ, ಅಥವಾ ಶಿಶುಗೀತೆಯಲ್ಲಿ ಪ್ರತಿಯೊಂದು ಪದವನ್ನು ಕೇಳಿದಾಗಲೂ ಒಂದು ವೃತ್ತದಿಂದ ಇನ್ನೊಂದು ವೃತ್ತಕ್ಕೆ ಜಿಗಿಯುವಂತೆ ಮಕ್ಕಳಿಗೆ ತಿಳಿಸಿ.

**ಪ್ರಾಸಗಳ ಬಗ್ಗೆ ಅರಿವು ಮೂಡಿಸುವುದು (3-5 ವರ್ಷದ ಮಕ್ಕಳಿಗೆ):**

ಈ ಚಟುವಟಿಕೆಗಳು ಶಬ್ದಗಳ ಜ್ಞಾನವನ್ನು ಪಡೆದುಕೊಳ್ಳಲು ಮತ್ತು ಕೆಲವು ಪದಗಳು ಒಂದೇ ರೀತಿಯಲ್ಲಿ ಅಂತ್ಯಗೊಳ್ಳುತ್ತವೆ ಎಂದು ತಿಳಿದುಕೊಳ್ಳಲು ಸಹಾಯ ಮಾಡುತ್ತದೆ.

- **ಚಪ್ಪಾಳೆಯ ಶಿಶುಗೀತೆ**: ಶಿಶುಗೀತೆಯನ್ನು ಹಾಡುವ ಅಥವಾ ಕೇಳಿಸುವ ಮೊದಲು, ಒಂದು ಪದವನ್ನು ಹೇಳಿ. ಉದಾಹರಣೆಗೆ, "ಮಳೆ ಬಂತು ಮಳೆ" ಎಂಬ ಶಿಶುಗೀತೆಯಿಂದ "ಮಳೆ" ಎಂಬ ಪದ. ಈ ಶಿಶುಗೀತೆಯನ್ನು ಹಾಡುವಾಗ ಅಥವಾ ಕೇಳಿಸುವಾಗ ಅವರಿಗೆ ಈ "ಮಳೆ" ಪದದೊಂದಿಗೆ ಪ್ರಾಸವಾಗುವಂತಹ ಪದಗಳನ್ನು (ಕೊಳೆ, ತೊಳೆ ಇತ್ಯಾದಿ) ಕೇಳಿದಾಗ ಜಿಗಿಯಲು, ತಮ್ಮ ಪಾದಗಳನ್ನು ಮುಟ್ಟಲು ಅಥವಾ ಚಪ್ಪಾಳೆ ತಟ್ಟಲು ಹೇಳಿ.

ಇಂಗ್ಲೀಷಿನ "Old MacDonald Had a Farm ಎಂಬ ಹಾಡಿನಲ್ಲಿ ನೀವು "cold, rolled, fold" ಮುಂತಾದ ಪದಗಳನ್ನು "old" ಪದದೊಂದಿಗೆ ಪ್ರಾಸಬದ್ಧವಾಗಿರುವಂತೆ; ಅಥವಾ "bucks, trucks, chucks" ಇತ್ಯಾದಿ ಪದಗಳನ್ನು "ducks" ಜೊತೆಗೆ ಪ್ರಾಸಬದ್ಧವಾಗಿರುವಂತೆ ಆಯ್ಕೆಮಾಡಬಹುದು. ಅದೇ ರೀತಿ ಕನ್ನಡದಲ್ಲಿ "ತೋಟಕೆ

ಹೋಗೋ ತಿಮ್ಮ" ಈ ಗೀತೆಯಲ್ಲಿ, "ಅಮ್ಮ" ಪದಕ್ಕೆ ಪ್ರಾಸವಾಗುವಂತೆ "ತಮ್ಮ, ಗುಮ್ಮ" ಪದಗಳನ್ನು ಅಥವಾ "ಉರಿ" ಪದಕ್ಕೆ ಪ್ರಾಸವಾಗುವಂತೆ ಗುರಿ, ತುರಿ" ಪದಗಳನ್ನು ಆಯ್ಕೆಮಾಡಿಕೊಳ್ಳಬಹುದು.

- ಅಂತ್ಯಪ್ರಾಸದ **ವ್ಯವಸ್ಥೆ:** ಶಿಕ್ಷಕರು 3 ಅಥವಾ 4 ಪದಗಳನ್ನು ಓದಿ ಹೇಳುತ್ತಾರೆ. ಯಾವ ಪದವು ಇತರ ಪದಗಳೊಂದಿಗೆ ಪ್ರಾಸವಾಗುವುದಿಲ್ಲವೆಂದು ಮಕ್ಕಳು ಗುರುತಿಸಬೇಕು (ಉದಾಹರಣೆಗೆ, ಹಾಲು, ಭಾಲು, ಹೋಗು, ಕಾಲು ಇತ್ಯಾದಿ).

- **ಜೋಡಿಸುವುದು:** ತರಗತಿಯಲ್ಲಿರುವ ಮಕ್ಕಳ ಸಂಖ್ಯೆಯಷ್ಟು ಪ್ರಾಸಬದ್ಧ ಪದಗಳ ಜೋಡಿಗಳನ್ನು ಆಯ್ಕೆ ಮಾಡಿಕೊಳ್ಳಿ. ವಿದ್ಯಾರ್ಥಿಗಳು ಪ್ರಾಸ ಪದಗಳಿಗೆ ಹೊಸಬರಾಗಿದ್ದರೆ, ಇತ್ತೀಚೆಗೆ ಕಲಿಸಿದ ಹಾಡು ಅಥವಾ ಪಠ್ಯದಿಂದ ಪದಗಳನ್ನು ಆಯ್ಕೆ ಮಾಡಿ. ಈ ಪದಗಳಿಗೆ ಚಿತ್ರದ ಕಾರ್ಡುಗಳನ್ನು ತಯಾರಿಸಿಕೊಂಡು ಪ್ರತಿಯೊಂದು ಮಗುವಿಗೂ ಒಂದು ಕಾರ್ಡನ್ನು ನೀಡಿ. ತರಗತಿಯಲ್ಲಿ ಸುತ್ತುತ್ತಾ ತಮ್ಮ ಪ್ರಾಸದ ಜೋಡಿಯನ್ನು ಹುಡುಕಲು ಮಕ್ಕಳಿಗೆ ಹೇಳಿ. ನಂತರ ಪದಗಳು ಹೇಗೆ ಒಂದೇ ರೀತಿಯಾಗಿವೆ ಮತ್ತು ಅವರು ತಮ್ಮ ಜೋಡಿಯನ್ನು ಹೇಗೆ ಕಂಡುಕೊಂಡರೆಂದು ಮಕ್ಕಳನ್ನು ಕೇಳಿ, ಪ್ರಾಸದ ಜೋಡಿ ಪದಗಳ ಜೊತೆಗೆ ಪ್ರಾಸವಾಗುವ ಇನ್ನೂ ಹೆಚ್ಚು ಪದಗಳನ್ನು ಹೇಳಲು ಅವರಿಗೆ ಸೂಚಿಸಿ. ಹಿರಿಯ ಮಕ್ಕಳಿಗೆ (6-8 ವರ್ಷದ) ಚಿತ್ರಗಳ ಬದಲಾಗಿ ದೊಡ್ಡ ಕಾರ್ಡಿನ ಮೇಲೆ ಮುದ್ರಿಸಲಾದ ಪದಗಳನ್ನು ಉಪಯೋಗಿಸಿ.

- **ಚಿತ್ರದ ವಿಂಗಡಣೆ:** ಪ್ರಾಸ ಪದಗಳಿಗೆ ಹೊಂದುವಂತೆ ಚಿತ್ರಗಳಿರುವ ಕಾರ್ಡುಗಳನ್ನು ಇಟ್ಟುಕೊಳ್ಳಿ. ಉದಾಹರಣೆಗೆ, "cat"- "bat"; "cap" - "tap", "pin"- "bin", "mop"- "top". ಇಬ್ಬರು ಮಕ್ಕಳು ಜೊತೆಯಾಗಿ, ಪ್ರಾಸ ಪದಗಳನ್ನು ಜೋಡಿಸುತ್ತಾ, ಚಿತ್ರದ ಕಾರ್ಡುಗಳನ್ನು ವಿಂಗಡಿಸಬೇಕು. ಬದಲಾಗಿ, ಈ ಕಾರ್ಡುಗಳನ್ನು ಒಂದು ಚೀಲದಲ್ಲಿ ಹಾಕಿ ತರಗತಿಯ ಸುತ್ತಲೂ ನಡೆಯುತ್ತಾ, ಪ್ರತಿ ಮಗುವಿಗೂ ಒಂದು ಕಾರ್ಡನ್ನು ಎತ್ತಿಕೊಳ್ಳುವಂತೆ ತಿಳಿಸಿ, ತಮ್ಮ ಬಳಿಯಿರುವ ಕಾರ್ಡಿನಲ್ಲಿರುವ ಚಿತ್ರದ ಪದಕ್ಕೆ ಪ್ರಾಸವಾಗುವ ಪದದ ಚಿತ್ರವಿರುವ ಕಾರ್ಡನ್ನು ಹೊಂದಿರುವ ತಮ್ಮ ಜೋಡಿಯನ್ನು ಕಂಡುಹಿಡಿಯಲು ಮಕ್ಕಳಿಗೆ ಹೇಳಿ. ಈ ಚಟುವಟಿಕೆಯನ್ನು ಭಾರತೀಯ ಭಾಷೆಯ ಪದಗಳಿಗೂ ಬಳಸಬಹುದು. ಕನ್ನಡದಲ್ಲಿನ ಪ್ರಾಸ ಪದಗಳಿಗೆ ಉದಾಹರಣೆ: "ಅಜ್ಜಿ - ಬಜ್ಜಿ", "ಹೆಜ್ಜೆ – ಗೆಜ್ಜೆ"; "ಹಣ್ಣು – ಕಣ್ಣು".

- **ಪದದ ಹಕ್ಕಿ:** ಮಕ್ಕಳನ್ನು ವೃತ್ತಾಕಾರದಲ್ಲಿ ನಿಲ್ಲಿಸಿ ಒಂದು ಪದವನ್ನು ("ಕುರಿ") ಹೇಳುತ್ತಾ ಒಂದು ದಿಂಬನ್ನು ಒಂದು ಮಗುವಿನ ಕಡೆಗೆ ಚಿಮ್ಮಿಸಿ. ಆ ಮಗು, ಅದಕ್ಕೆ ಪ್ರಾಸವಾಗುವ (ಗುರಿ) ಇನ್ನೊಂದು ಪದವನ್ನು ಹೇಳುತ್ತಾ, ಪುನಃ ಶಿಕ್ಷಕರ ಕಡೆಗೆ ದಿಂಬನ್ನು ಚಿಮ್ಮಿಸಬೇಕು. ಮಕ್ಕಳಿಗೆ ಅರ್ಥಪೂರ್ಣ ಪದಗಳನ್ನು ಹೇಳಲು ಸಾಧ್ಯವಾಗದಿದ್ದರೆ ತೊಂದರೆ ಇಲ್ಲ, ಆದರೆ ಪ್ರಾಸಬದ್ಧ ಪದಗಳನ್ನು ಗುರುತಿಸಲು ಪ್ರೋತ್ಸಾಹಿಸಿ.

- ತರಗತಿಯ ಸುತ್ತಲೂ ಪ್ರಾಸವಾಡುವುದು: ಕೊಠಡಿಯಲ್ಲಿನ ಒಂದು ವಸ್ತುವನ್ನು ಎತ್ತಿಕೊಂಡು ಆ ವಸ್ತುವು ಪ್ರತಿನಿಧಿಸುವ ಪದಕ್ಕೆ ಪ್ರಾಸವಾಗುವಂತಹ ಇನ್ನೊಂದು ಪದವನ್ನು ಹೇಳಲು ಮಕ್ಕಳಿಗೆ ತಿಳಿಸಿ. ತರಗತಿಯಲ್ಲಿ ಸುತ್ತುತ್ತಾ, ವಸ್ತುಗಳನ್ನು ಎತ್ತಿಕೊಂಡು ಅವುಗಳಿಗೆ ಪ್ರಾಸವಾಗುವ ಪದಗಳನ್ನು ರೂಪಿಸಿ. ಮಕ್ಕಳ ಗುಂಪುಗಳನ್ನು ಮಾಡಿಯೂ ಈ ಆಟವನ್ನು ಆಡಿಸಬಹುದು, ಒಂದು ಗುಂಪು ವಸ್ತುವನ್ನು ಆಯ್ದುಕೊಳ್ಳುತ್ತದೆ ಮತ್ತು ಇನ್ನೊಂದು ಗುಂಪು ಪ್ರಾಸಪದವನ್ನು ರೂಪಿಸುತ್ತದೆ.

- **ಪ್ರಾಸದ ಜಾಡಿ:** ಕಾಗದದ ಚೀಟಿಗಳಲ್ಲಿ ಪ್ರಾಸಬದ್ಧವಾಗಿ ಕೊನೆಗೊಳ್ಳುವ ಎರಡು (ಅಥವಾ ಅದಕ್ಕಿಂತ ಹೆಚ್ಚು) ವಾಕ್ಯಗಳನ್ನು ಬರೆಯಿರಿ. ಆದರೆ ಎರಡನೆಯ ಪ್ರಾಸಪದವನ್ನು ಬರೆಯದೆ ಖಾಲಿ ಬಿಡಿ. ಪ್ರಾಸಪದವನ್ನು ಹುಡುಕಬೇಕಾಗಿರುವ ಪದವನ್ನು ಎತ್ತಿತೋರಿಸುವಂತೆ ಮೊದಲನೆ ವಾಕ್ಯವನ್ನು ಓದಿ. ನಂತರ ಎರಡನೆಯ ವಾಕ್ಯವನ್ನು ಓದಿ ಪ್ರಾಸಪದವನ್ನು ಸೂಚಿಸಲು ಮಕ್ಕಳಿಗೆ ತಿಳಿಸಿ. ಈ ಕೆಳಗೆ ಕೆಲವು ಉದಾಹರಣೆಗಳನ್ನು ಕೊಡಲಾಗಿದೆ:

ನಾನು ಹೋಗುವೆ ಶಾಲೆಗೆ. ಶಾಲೆ ಮುಗಿದ ಮೇಲೆ ಬರುವೆ ಮತ್ತೆ ---- (ಮನೆಗೆ)
ಕಳ್ಳ ಬೆಕ್ಕು ಬಂದಿತು. ಅಲ್ಲಿ ಇಲ್ಲಿ -------- (ನೋಡಿತು)

ಮಕ್ಕಳಿಗೆ ಚಟುವಟಿಕೆಯನ್ನು ಅರ್ಥಮಾಡಿಸುವ ನಿಟ್ಟಿನಲ್ಲಿ ನೆರವಾಗಲು, ಜನಪ್ರಿಯ ಪದ್ಯಗಳು ಅಥವಾ ಶಿಶುಗೀತೆಗಳಲ್ಲಿನ ಕೆಲವು ಪದಗಳನ್ನು ಉಪಯೋಗಿಸಿ, ಈಗಾಗಲೇ ಅವರಿಗೆ ತಿಳಿದಿರುವಂತಹ ಪ್ರಾಸ ಪದಗಳತ್ತ ಅವರ ಗಮನವನ್ನು ಸೆಳೆಯಿರಿ. ಈ ಪದಗಳು ಹೇಗೆ ಒಂದೇ ರೀತಿಯಾಗಿವೆ ಎಂದು ಅವರನ್ನು ಕೇಳಿ.

ಒಂದು ಎರಡು
ಬಾಳೆಲೆ --- (ಹರಡು)
ಮೂರು ನಾಕು
ಅನ್ನ ---- (ಹಾಕು)

### ಅಕ್ಷರ ಮತ್ತು ಧ್ವನಿಮಾಗಳ ಅರಿವು ಮೂಡಿಸುವುದು (5-8 ವರ್ಷದ ಮಕ್ಕಳಿಗೆ):

ಹೆಚ್ಚಿನ ಭಾರತೀಯ ಭಾಷೆಗಳಲ್ಲಿ, ಅಕ್ಷರವು, ಒಂದು ಉಚ್ಚರಾಂಶವೂ ಆಗಿರುತ್ತದೆ. ಏಕೆಂದರೆ, ಅದು ಒಂದು ಸ್ವರ ಮತ್ತು ಒಂದು ವ್ಯಂಜನದಿಂದ ಕೂಡಿದೆ. ಉದಾಹರಣೆಗೆ, "ಕಮಲ್" ಎಂಬ ಪದದಲ್ಲಿ "ಕ" ಎಂಬುದು ಒಂದು ಅಕ್ಷರವಾಗಿದೆ. ಏಕೆಂದರೆ, ಇದನ್ನು ಕ್ + ಅ ಎಂಬ ಚಿಕ್ಕ ಘಟಕಗಳಾಗಿ ವಿಭಾಗಿಸಬಹುದು. ಅದೇ ರೀತಿ, "ಮ"ಕೂಡ ಒಂದು ಅಕ್ಷರವಾಗಿದೆ. ಆದರೆ, "ಲ್"ನಲ್ಲಿ ಸ್ವರವಿಲ್ಲದ ಕಾರಣ, ಅದೊಂದು ಧ್ವನಿಮಾ. ಆದ್ದರಿಂದ, ಭಾರತೀಯ ಲಿಪಿಗಳನ್ನು ಮೂಲಾಕ್ಷರಮಾಲೆ (alphasyllabic) ಎಂದು ಕರೆಯುತ್ತಾರೆ. ಏಕೆಂದರೆ ಅಕ್ಷರಗಳು ಕೆಲವೊಮ್ಮೆ ಉಚ್ಚಾರಾಂಶಗಳನ್ನು, ಮತ್ತೆ ಕೆಲವೊಮ್ಮೆ ಧ್ವನಿಮಾಗಳನ್ನು (phoneme) ಪ್ರತಿನಿಧಿಸುತ್ತವೆ. ಇದಕ್ಕೆ ವಿರುದ್ಧವಾಗಿ, ಇಂಗ್ಲಿಷ್ ಭಾಷೆಯ ವರ್ಣಮಾಲೆಯಲ್ಲಿ ಪ್ರತಿ ಅಕ್ಷರವೂ ಒಂದು ಧ್ವನಿಮಾವನ್ನು ಪ್ರತಿನಿಧಿಸುತ್ತದೆ. ಆದ್ದರಿಂದ, "ಕ" ಶಬ್ದವನ್ನು ಪ್ರತಿನಿಧಿಸಲು "ka" ಎಂಬ ಎರಡು ಅಕ್ಷರಗಳು ಬೇಕಾಗುತ್ತವೆ, ಕನ್ನಡ ಅಥವಾ ಹಿಂದಿಯಲ್ಲಿ ಒಂದೇ ಅಕ್ಷರ ಸಾಕಾಗುತ್ತದೆ.

ಉಚ್ಚಾರಾಂಶಗಳ/ಅಕ್ಷರಗಳ ಅರಿವನ್ನು ಮಕ್ಕಳು ಬೆಳೆಸಿಕೊಂಡಲ್ಲಿ, ಮುಂದೆ ಭಾರತೀಯ ಲಿಪಿಗಳನ್ನು ಓದಿ ಬರೆಯುವುದನ್ನು ಕಲಿಯಲು ಸಹಾಯಕವಾಗುತ್ತದೆ. ಈ ವಿಭಾಗದಲ್ಲಿ, ಉಚ್ಚಾರಾಂಶ/ಅಕ್ಷರಗಳ ಅರಿವನ್ನು ಬೆಳೆಸಿಕೊಳ್ಳುವ ಚಟುವಟಿಕೆಗಳನ್ನು ಪ್ರಸ್ತುತಪಡಿಸುತ್ತೇವೆ. ಈ ಚಟುವಟಿಕೆಗಳನ್ನು ಮಕ್ಕಳಿಗೆ ಧ್ವನಿಮಾಗಳನ್ನು ಕಲಿಸಲು ಬಳಸಿಕೊಳ್ಳಬಹುದು. ಇವು ಇಂಗ್ಲಿಷ್‌ನ್ನು ಓದಿ ಮತ್ತು ಬರೆಯುವುದನ್ನು ಕಲಿಯಲು ಬಹಳ ಮುಖ್ಯವಾದವು.

### ಉಚ್ಚಾರಾಂಶಗಳ/ಅಕ್ಷರಗಳ ಅರಿವನ್ನು ಮೂಡಿಸುವುದು:

ತಮ್ಮ ಗಲ್ಲದ ಕೆಳಗೆ ಕೈಗಳನ್ನಿಟ್ಟುಕೊಂಡು ಅಕ್ಷರಗಳನ್ನು ಅರ್ಥಮಾಡಿಕೊಳ್ಳಲು ಮಕ್ಕಳಿಗೆ ಕಲಿಸಿ. ಪ್ರತಿಬಾರಿ ಗಲ್ಲ ಕೆಳಗಿಳಿದಾಗ, ಅದು ಒಂದು ಅಕ್ಷರ. ಉದಾಹರಣೆಗೆ, ರು – ಚಿ – ಕಾ, ಇದರಲ್ಲಿ ಮಗುವಿನ ಗಲ್ಲವು ಮೂರು ಬಾರಿ ಚಲಿಸುವುದು. ಮಕ್ಕಳು

ಉಚ್ಚಾರಾಂಶ/ಅಕ್ಷರಗಳನ್ನು ಅರ್ಥಮಾಡಿಕೊಂಡ ಮೇಲೆ ಈ ಕೆಲವು ಚಟುವಟಿಕೆಗಳನ್ನು ಪ್ರಯತ್ನಿಸಿ. ಅವುಗಳು ಮಕ್ಕಳಿಗೆ ಪದವೊಂದರ ಉಚ್ಚಾರಾಂಶದ ಅರಿವನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತವೆ.

- ಹೆಸರಿನಲ್ಲೇನಿದೆ? ಒಂದು ಮಗುವಿನ ಹೆಸರು ಹೇಳಿ, ಅದರಲ್ಲಿ ಎಷ್ಟು ಅಕ್ಷರಗಳಿವೆ ಎಂದು ಕೇಳಿ. ಪ್ರತಿ ಅಕ್ಷರಕ್ಕೂ ಮಕ್ಕಳು ಚಪ್ಪಾಳೆ ತಟ್ಟಬೇಕು. ಪ್ರಿಯಾಂಕ ಹೆಸರಿನಲ್ಲಿ ಮೂರು ಅಕ್ಷರಗಳಿವೆ, ಪ್ರಿ-ಯಾಂ- ಕ, ಆದ್ದರಿಂದ ಮೂರು ಬಾರಿ ಅವರು ಚಪ್ಪಾಳೆ ತಟ್ಟುತ್ತಾರೆ. ಮಕ್ಕಳು ಇದನ್ನು ಅರ್ಥಮಾಡಿಕೊಂಡರೆ, ಅದರ ಸಂಯೋಜನೆಯು ಅವರಿಗೆ ಮೋಜನ್ನು ನೀಡುತ್ತದೆ: ಊಟಕ್ಕೆ, ಆಟಕ್ಕೆ ಅಥವಾ ಹಾಲಿನ ಲೋಟ ತೆಗೆದುಕೊಳ್ಳಲು ತಮ್ಮ ಹೆಸರಿನಲ್ಲಿರುವ ಅಕ್ಷರಗಳ ಸಂಖ್ಯೆಯ ಆಧಾರದ ಮೇಲೆ ಸರತಿಯ ಸಾಲನ್ನು ಮಾಡಬಹುದು – ಒಂದು ಬಾರಿ ಚಪ್ಪಾಳೆ ತಟ್ಟಿದಾಗ, ಒಂದು ಅಕ್ಷರದ ಹೆಸರಿರುವ ಮಕ್ಕಳು ಸಾಲಾಗಿ ನಿಲ್ಲುತ್ತಾರೆ. ಎರಡು ಬಾರಿ ಚಪ್ಪಾಳೆ ತಟ್ಟಿದಾಗ ಎರಡು ಅಕ್ಷರಗಳ ಹೆಸರಿರುವ ಮಕ್ಕಳು ಸಾಲಾಗಿ ನಿಲ್ಲುತ್ತಾರೆ.

- ಗೊಂಬೆಯಾಟ: ನಿಮ್ಮ ಗೊಂಬೆಯು ಒಂದು ಬಾರಿಗೆ ಒಂದು ಪದದ ಒಂದು ಭಾಗವನ್ನು ಮಾತ್ರ ಹೇಳುತ್ತಿದ್ದು, ಅಕ್ಷರಗಳನ್ನು ಜೋಡಿಸಲು ಅದಕ್ಕೆ ಸಹಾಯವು ಬೇಕೆಂಬುದಾಗಿ ತಿಳಿಸಿ. ಈ ನಿಟ್ಟಿನಲ್ಲಿ ಮಕ್ಕಳೊಂದಿಗಿನ ನಿಮ್ಮ ಸಂಭಾಷಣೆಯ ಉದಾಹರಣೆ ಹೀಗಿದೆ: ಗೊಂಬೆಯು ನಿಮ್ಮ ಸ್ನೇಹಿತೆಯರಲ್ಲೊಬ್ಬಳನ್ನು - /ಶಾ/ /ರ/ /ದ/ ಎಂದು ಕರೆಯುತ್ತದೆ. ನೀವು ಆಕೆಯ ಹೆಸರನ್ನು ಹೇಳುವಿರಾ?

"ಶಾರದ, ಹೌದು!"

"ಗೊಂಬೆಯು ಒಂದು ಪ್ರಾಣಿಯ ಹೆಸರನ್ನು ಹೇಳಬೇಕೆಂದಿದೆ- /ಅ/ /ಳಿ/ -/ಲು/ "ಅದು ಯಾವುದು?"

"ಅಳಿಲು, ಹೌದು!"

ಈ ಚಟುವಟಿಕೆಯನ್ನು ಧ್ವನಿಮಾಗಳನ್ನು ಕಲಿಸಲೂ ಉಪಯೋಗಿಸಬಹುದು. ಉದಾಹರಣೆಗೆ, ಕೋಳಿ- ಪದವನ್ನು /ಕ್/ /ಓ//ಳ್/ /ಇ/ ಎಂಬುದಾಗಿ ವಿಭಾಗಿಸಬಹುದು.

## ಧ್ವನಿಗಳನ್ನು ಗುರುತಿಸುವುದು ಮತ್ತು ಪ್ರತ್ಯೇಕಿಸುವುದು:

ಮಕ್ಕಳು ಪದಗಳಲ್ಲಿನ ಪ್ರತ್ಯೇಕ ಅಕ್ಷರಗಳ ಧ್ವನಿಗಳನ್ನು ಗಮನಿಸಿ ಗುರುತಿಸುವುದು ಮುಖ್ಯವಾದುದು. ಈ ಚಟುವಟಿಕೆಗಳಲ್ಲಿ, ಮಗುವಿನ ಗಮನವನ್ನು ಮೊದಲು ಪದದ ಆರಂಭದ ಧ್ವನಿ, ನಂತರ ಅಂತ್ಯದ ಧ್ವನಿ, ಮತ್ತು ಕೊನೆಯಲ್ಲಿ ಮಧ್ಯದ ಧ್ವನಿಯ ಕಡೆಗೆ ನಿರ್ದೇಶಿಸಬೇಕು.

- **ಧ್ವನಿ ಹೊಂದಿಸುವುದು:** ಕೆಲವು ಚಿತ್ರಗಳನ್ನು ಅಥವಾ ವಸ್ತುಗಳನ್ನು ಸಿದ್ಧಪಡಿಸಿಕೊಳ್ಳಿ. ಒಂದು ಚಿತ್ರವನ್ನು ತೋರಿಸಿ, "ನೀವು ಏನು ನೋಡುತ್ತಿರುವಿರಿ?" ಎಂದು ಕೇಳಿ, – ಅದು ಒಂದು ಪೆನ್ನು ಎಂಬುದನ್ನು ತಿಳಿಸಿ. ನಂತರ, ಇದರ ಮೊದಲ ಧ್ವನಿ ಯಾವುದೆಂದು ಮಕ್ಕಳನ್ನು ಕೇಳಿ. "ಪ" ಅದರ ಮೊದಲ ಧ್ವನಿ. ಮೊದಲು ಧ್ವನಿಗಳನ್ನು ಮಾದರಿಯಾಗಿ ಹೇಳಿ ತೋರಿಸಿ. ಈಗ, ತರಗತಿಯ ಸುತ್ತಲೂ ನೋಡುತ್ತಾ, "ಪ" ಧ್ವನಿಯಿಂದ ಪ್ರಾರಂಭವಾಗುವ ಬೇರೆ ವಸ್ತುಗಳ ಹೆಸರುಗಳನ್ನು ಹೇಳುವಂತೆ ತಿಳಿಸಿ - ಪೇಪರ್, ಪುಸ್ತಕ, ಪೆಟ್ಟಿಗೆ. ನಂತರ ಬೇರೆ ಬೇರೆ ಧ್ವನಿಗಳಿಗೆ ಈ ಚಟುವಟಿಕೆಯನ್ನು ಪುನರಾವರ್ತಿಸಿ.

ಇತರ ಉದಾಹರಣೆಗಳು: ಗಾಳಿಪಟದ ಚಿತ್ರವಿರುವ ಕಾರ್ಡು. ಇದರಲ್ಲಿ ಮೊದಲನೆಯ ಧ್ವನಿಯು 'ಗ'. ಮಕ್ಕಳು 'ಗ'ದಿಂದ ಪ್ರಾರಂಭವಾಗುವ ಪದಗಳನ್ನು ಹೇಳಬೇಕು – ಗಡಿಯಾರ, ಗಂಟೆ ಇತ್ಯಾದಿ.

	**ಅಂತ್ಯಾಕ್ಷರಿ**: ಅಂತ್ಯಾಕ್ಷರಿಯ ಮೂಲಕ ಪದಗಳಲ್ಲಿನ ಮೊದಲನೆಯ ಹಾಗೂ ಕೊನೆಯ ಧ್ವನಿಗಳತ್ತ ಮಕ್ಕಳ ಗಮನವನ್ನು ಕೇಂದ್ರೀಕರಿಸಿ. ಒಬ್ಬನು ಒಂದು ಪದವನ್ನು ಹೇಳಿದಾಗ, ಇನ್ನೊಬ್ಬನು ಆ ಪದದ ಅಂತ್ಯದ ಶಬ್ದದಿಂದ ಪ್ರಾರಂಭವಾಗುವ ಪದವನ್ನು ಹೇಳಬೇಕು. ಉದಾಹರಣೆಗೆ, ಮರ- ರಾಮ, ಮಲ್ಲಿಗೆ- ಗೆಳೆಯ, ಯಮ- ಮಗ ಇತ್ಯಾದಿ.

	**ಚಿತ್ರ ವಿಂಗಡಣೆ:** ನಿತ್ಯ ಜೀವನದ ವಸ್ತುಗಳ ಚಿತ್ರಗಳಿರುವ ಕಾರ್ಡುಗಳನ್ನು ಮಕ್ಕಳಿಗೆ ಕೊಟ್ಟು, ಅವುಗಳಲ್ಲಿ ಮೊದಲನೆ ಧ್ವನಿಗೆ (ಅಥವಾ ಕೊನೆಯ ಅಥವಾ ಮಧ್ಯದ ಧ್ವನಿಗೆ) ಸಮಾನವಾದ ಧ್ವನಿಯನ್ನು ಹೊಂದಿರುವ ಚಿತ್ರಗಳನ್ನು ವಿಂಗಡಿಸಲು ಹೇಳಿ. ಅವರಿಗೆ ಸಹಾಯ ಮಾಡಲು, ಬೇರೊಂದು ಧ್ವನಿಯನ್ನು ತಿಳಿಯಪಡಿಸುವ ಕೆಲವು ಸುಳಿವು ಸೂಚಕ (hint) ಕಾರ್ಡುಗಳನ್ನು ಕೊಟ್ಟು, ಅದರಂತೆ ತಮ್ಮ ಕಾರ್ಡುಗಳ ಸಮುಚ್ಚಯವನ್ನು ವಿಂಗಡಿಸುವಂತೆ ತಿಳಿಸಿ. ನಂತರ, ಮಕ್ಕಳಿಗೆ ಒಂದು ಆಯ್ದ ಗುಂಪಿನ ಕಾರ್ಡುಗಳನ್ನು ನೀಡಿ, ಅವುಗಳಲ್ಲಿನ ಧ್ವನಿಗಳು ಹೇಗೆ ಒಂದೇ ರೀತಿಯಾಗಿವೆ ಅಥವಾ ಬೇರೆ ರೀತಿಯಾಗಿವೆ ಎಂದು ಹುಡುಕಲು ತಿಳಿಸಿ.

	**ಆದಿಪ್ರಾಸವನ್ನು ಸಕ್ರಿಯಗೊಳಿಸುವಿಕೆ**: ಕೆಲವು ವಸ್ತುಗಳನ್ನು ಒಂದು ಚೀಲದಲ್ಲಿರಿಸಿ, ಮಕ್ಕಳು ಒಬ್ಬೊಬ್ಬರಾಗಿ ಒಂದೊಂದು ವಸ್ತುವನ್ನು ತೆಗೆದುಕೊಳ್ಳುವಂತೆ ಸೂಚಿಸಿ. ಅವರು ಅದನ್ನು ಹೆಸರಿಸಿ, ಆ ಪದದ ಆದಿಯಲ್ಲಿನ ಧ್ವನಿಯೊಂದಿಗೆ ಪ್ರಾಸವಾಗುವ ಪದವನ್ನು ಅದಕ್ಕೆ ಹೊಂದಿಸಿ ಹೇಳಬೇಕು. ಉದಾಹರಣೆಗೆ, ಚಿಕ್ಕ ಚಿತ್ರ, ಕಪ್ಪು ಕಾಗೆ, ಪಾರಿವಾಳದ ಪುಕ್ಕ ಇತ್ಯಾದಿ. ಈ ಚಟುವಟಿಕೆಯನ್ನು ದೊಡ್ಡ ಮಕ್ಕಳಿಗೆ ಅನ್ವಯಿಸುವಾಗ, ಅವರ ಉತ್ತರಗಳನ್ನು ಒಂದು ಚಾರ್ಟಿನಲ್ಲಿ ದಾಖಲು ಮಾಡಿಕೊಳ್ಳಬಹುದು.

**ಶಬ್ದಗಳ: ಸಮ್ಮಿಶ್ರಣ:**

ಪ್ರತ್ಯೇಕವಾಗಿ ಉಚ್ಚರಿಸಲ್ಪಟ್ಟ ಅನುಕ್ರಮಿತ ಶಬ್ದಗಳನ್ನು ಕೇಳಿಸಿಕೊಂಡು, ಅವುಗಳನ್ನು ಜೋಡಿಸಿ ಅರ್ಥಪೂರ್ಣ ಪದವನ್ನಾಗಿಸುವ ಸಾಮರ್ಥ್ಯವನ್ನು ಇದು ಒಳಗೊಂಡಿದೆ.

- **ಮಕ್ಕಳೇ ಪದಗಳಾಗುವುದು:** ಮಕ್ಕಳು ಒಬ್ಬರಿಗೊಬ್ಬರು ಕೈ ಹಿಡಿದುಕೊಂಡು ನಿಲ್ಲುವಷ್ಟು ಹತ್ತಿರದಲ್ಲಿ ವೃತ್ತಗಳನ್ನು ಬರೆಯಿರಿ. ಆಯ್ಕೆಮಾಡಿದ ಪದದಲ್ಲಿ ಇರುವ ಶಬ್ದಗಳಷ್ಟು ವೃತ್ತಗಳಿರಲಿ. ಅಷ್ಟೂ ಮಕ್ಕಳಿಗೆ, ಮುಂದೆ ಬಂದು, ಒಬ್ಬೊಬ್ಬರೂ ಒಂದೊಂದು ಶಬ್ದವನ್ನು ಪ್ರತಿನಿಧಿಸುತ್ತಾ, ಸರಿಯಾದ ವೃತ್ತದಲ್ಲಿ ನಿಲ್ಲಲು ಸೂಚಿಸಿ. ಈಗ ಮೊದಲನೆಯ ಮಗು, ಮೊದಲನೆಯ ಶಬ್ದವನ್ನು ಹೇಳುತ್ತಾ ಪಕ್ಕದ ಮಗುವಿನ ಕೈ ಹಿಡಿಯಬೇಕು, ಆ ಮಗು ಎರಡನೆಯ ಶಬ್ದವನ್ನು ಹೇಳಿ, ತನ್ನ ಪಕ್ಕದ ಮಗುವಿನ ಕೈ ಹಿಡಿಯುತ್ತದೆ. ಈ ರೀತಿ ಮುಂದುವರಿಯುತ್ತಾ, ಎಲ್ಲಾ ಶಬ್ದಗಳನ್ನು ಹೇಳಿದ ಮೇಲೆ, ಎಲ್ಲಾ ಮಕ್ಕಳೂ ಮುಂದೆ ಬಂದು, ದೊಡ್ಡ ವೃತ್ತದಲ್ಲಿ ನಿಂತು, ಆ ಪದವನ್ನು ಒಟ್ಟಿಗೆ ಹೇಳಬೇಕು. ಉದಾಹರಣೆಗೆ, "ಉರಗ" ಪದದಲ್ಲಿರುವ ಮೂರು ಶಬ್ದಗಳಾದ ಉ/ /ರ/ /ಗ/ಗಳಿಗೆ ಮೂರು ವೃತ್ತಗಳನ್ನು ಬರೆದು, ಅದರಲ್ಲಿ ನಿಂತಿರುವ ಮೂರು ಮಕ್ಕಳು, ಸಂಬಂಧಿತ ಶಬ್ದವನ್ನು ಹೇಳಿ, ನಂತರ ಎಲ್ಲರೂ ಒಟ್ಟಿಗೆ ಅವುಗಳನ್ನು "ಸಂಮ್ಮಿಶ್ರಗೊಳಿಸಿ", ಒಂದು ಪದವಾಗುವಂತೆ ಹೇಳುವುದು.
- **ಗೊಂಬೆಯಾಟ:** ನಿಮ್ಮ ಗೊಂಬೆಯು ಒಂದು ಬಾರಿಗೆ ಒಂದು ಪದದ ಒಂದು ಭಾಗವನ್ನು ಮಾತ್ರ ಹೇಳುತ್ತಿದ್ದು, ಶಬ್ದಗಳನ್ನು ಒಟ್ಟಾಗಿ ಸಂಮಿಶ್ರಿತಗೊಳಿಸಲು ಅದಕ್ಕೆ ಸಹಾಯವು ಬೇಕಾಗುವುದೆಂದು ಹೇಳಿ. ಉದಾಹರಣೆಗೆ, ಗೊಂಬೆಯು /ಆ/- /ಕ/-/ಳು/ ಎಂದು ಹೇಳಿದಾಗ, ಮಕ್ಕಳು "ಆಕಳು" ಎಂದು ಹೇಳಬಹುದು.
- ಮನಸ್ಸನ್ನು ಓದುವುದು: ನೀವು ಕೊಡುವ ಸುಳಿವುಗಳನ್ನು ಅರ್ಥೈಸಿಕೊಳ್ಳುವುದರ ಮೂಲಕ ಸರಿಯಾದ ಪದವನ್ನು ಮಕ್ಕಳು ಕಂಡುಹಿಡಿಯಬೇಕು. ಉದಾಹರಣೆ: "ನನಗೆ ಒಂದು ಪದವು ಗೊತ್ತಿದ್ದು, ಅದು 'ಯಿ' ಯಿಂದ ಕೊನೆಗೊಳ್ಳುತ್ತದೆ ಮತ್ತು 'ನಾ'ದಿಂದ ಪ್ರಾರಂಭವಾಗುತ್ತದೆ. ಇದು ಯಾವ ಪದ? ಶಬ್ದಗಳನ್ನು ಸರಿಯಾದ ಕ್ರಮದಲ್ಲಿ ಹೇಳುವ ಮೂಲಕ ಸುಳಿವು ಕೊಟ್ಟು,

ಶಬ್ದಗಳನ್ನು ಮಿಶ್ರಗೊಳಿಸಲು ತಿಳಿಸಿ. ಪದವನ್ನು ಮಿಶ್ರಿತಗೊಳಿಸುವ ನಿಟ್ಟಿನಲ್ಲಿ, ಒಂದು ಬಾರಿಗೆ ಒಂದು ಶಬ್ದವನ್ನು ಬದಲಾಯಿಸುತ್ತಾ ಹೋಗಬಹುದು.

• **ಶಬ್ದದ ಉಡುಗೊರೆ:** ಒಂದು ಹರಳು ಕಲ್ಲು ಅಥವಾ ನಾಣ್ಯವನ್ನು ಒಂದು ಪ್ಲ್ಯಾಸ್ಟಿಕ್ ಅಥವಾ ಲೋಹದ ಡಬ್ಬದಲ್ಲಿ ಹಾಕಿ, ಸಾಧ್ಯವಾದರೆ, ಅದನ್ನು ಉಡುಗೊರೆಯ ರೀತಿಯಲ್ಲಿ ಪ್ಯಾಕ್ ಮಾಡಿ. ಈ 'ಉಡುಗೊರೆ'ಯನ್ನು ತೆಗೆದುಕೊಂಡು ಒಂದು ಮಗುವಿನ ಬಳಿಗೆ ಹೋಗಿ, "ಈ ಪೆಟ್ಟಿಗೆಯಲ್ಲಿ ಏನಿದೆ ಎಂದು ಹೇಳಲು ನಾನು ನಿನಗೆ ಸುಳಿವುಗಳನ್ನು ಕೊಡುತ್ತೇನೆ" ಎಂದು ತಿಳಿಸಿ, ಪೆಟ್ಟಿಗೆಯನ್ನು ಅಲ್ಲಾಡಿಸುತ್ತಾ ವಸ್ತುವಿನ ಹೆಸರಿನ ಪದದ ಒಂದೊಂದೇ ಶಬ್ದವನ್ನು ಹೇಳಿ. ಆ ಶಬ್ದಗಳನ್ನು ಮಿಶ್ರಗೊಳಿಸಿ, ಉಡುಗೊರೆಯನ್ನು ಊಹಿಸಲು ಮಗುವಿಗೆ ತಿಳಿಸಿ. ಊಹೆಯು ಸರಿಯಾದರೆ, ಆ ಮಗು ಉಡುಗೊರೆಯನ್ನು ತೆಗೆದುಕೊಂಡು ಇನ್ನೊಂದು ಮಗುವಿನ ಬಳಿಗೆ ಹೋಗಿ ಆಟವನ್ನು ಪುನರಾವರ್ತಿಸುತ್ತದೆ. ಉದಾಹರಣೆಗೆ, ಶಿಕ್ಷಕರು /ಪೆ/-/ನ್ಸಿ/-/ಲ್/ ಎಂದು ಹೇಳಿ, ಇದು ಏನು ಎಂದು ಕೇಳಿದಾಗ, ಮಗುವು, "ಪೆನ್ಸಿಲ್" ಎಂದು ಹೇಳುವುದು. ನಂತರ, ಆ ಮಗು "ಉಡುಗೊರೆ"ಯನ್ನು ತೆಗೆದುಕೊಂಡು ಇನ್ನೊಂದು ಮಗುವಿನ ಬಳಿಗೆ ಹೋಗಿ, "ಉಡುಗೊರೆ"ಯ ಬಗ್ಗೆ "/ಮಿ/-/ಠಾ/-/ಯಿ/ ಎಂದು ಹೇಳಿದಾಗ, ಆ ಮಗು "ಮಿಠಾಯಿ" ಎಂದು ಹೇಳುವುದು.

• **ಶಬ್ದಗಳನ್ನು ವಿಭಾಗಿಸುವುದು**: ಇದು ಒಂದು ಪದವನ್ನು ಕೇಳಿಸಿಕೊಂಡು, ಅದನ್ನು ಅದರ ಘಟಕಗಳಾಗಿ ವಿಭಾಗಿಸುವುದನ್ನೊಳಗೊಂಡಿದೆ. ಇದು ಮಕ್ಕಳಿಗೆ ಅಕ್ಷರಗಳನ್ನು ಬಿಡಿಸಿ ಸರಿಯಾಗಿ ಉಚ್ಚರಿಸಲು ಸಹಾಯಮಾಡುತ್ತದೆ.

 **ಶಬ್ದದ ಲಕೋಟೆ:** ಮಕ್ಕಳಿಗೆ ಪರಿಚಿತವಾಗಿರುವ ಕೆಲವು ಪದಗಳನ್ನು ಆರಿಸಿಕೊಳ್ಳಿ. ಪ್ರತಿ ಮಗುವಿಗೂ ಕೆಲವು ಗುರುತು ಬಿಲ್ಲೆಗಳನ್ನು (ಬಾಟಲಿಯ ಮುಚ್ಚಳ, ಹರಳುಕಲ್ಲು ಅಥವಾ ನಾಣ್ಯ) ಮತ್ತು ಒಂದು ದಿನಪತ್ರಿಕೆಯ ಲಕೋಟೆಯನ್ನು ನೀಡಿ. ಸುಲಭವಾದ ಒಂದು ಪದವನ್ನು ಜೋರಾಗಿ ಹೇಳಿ. ಆ ಪದದಲ್ಲಿ ಅವರು ಕೇಳಿಸಿಕೊಂಡ ಶಬ್ದಗಳಷ್ಟು ಬಿಲ್ಲೆಗಳನ್ನು ಲಕೋಟೆಯಲ್ಲಿ ಹಾಕಲು ಸೂಚಿಸಿ. ಶಬ್ದಗಳನ್ನು ಹೇಗೆ ಸೂಕ್ತವಾಗಿ ವಿಭಾಗಿಸುವುದು (ಉಚ್ಚಾರಾಂಶ ಅಥವಾ ಅಕ್ಷರಗಳಾಗಿ) ಎಂಬುದಕ್ಕೆ ಕೆಲವು ಉದಾಹರಣೆಗಳನ್ನು ನೀಡಿ. ನಂತರ, "__________ ಪದದಲ್ಲಿ ಎಷ್ಟು ಶಬ್ದಗಳನ್ನು ಕೇಳಿಸಿಕೊಂಡಿರಿ?" ಎಂದು ಕೇಳಿ. ಕೆಲವು ಮಕ್ಕಳನ್ನು, ಅವರಿಗೆ ಅಷ್ಟು ಶಬ್ದಗಳು ಹೇಗೆ ಸಿಕ್ಕಿದವು ಎಂಬುದನ್ನು ನಿರೂಪಿಸುವಂತೆ ಕೇಳಬಹುದು (ಅವರು ಪ್ರತಿ ಶಬ್ದಕ್ಕೆ ಒಂದೊಂದು ಗುರುತು ಬಿಲ್ಲೆಯನ್ನು ತೋರಿಸಬೇಕು). ಉದಾಹರಣೆಗೆ, 'ಗಮನಿಸು' ಪದದಲ್ಲಿ ನಾಲ್ಕು ಶಬ್ದಗಳಿದ್ದು: ಗ-ಮ-ನಿ-ಸು/, ಅದರಂತೆ ಮಕ್ಕಳು ನಾಲ್ಕು ಗುರುತು ಬಿಲ್ಲೆಗಳನ್ನು ಲಕೋಟೆಯೊಳಗೆ ಹಾಕುತ್ತಾರೆ; "ಆಕಳು" ಪದದಲ್ಲಿ ಆ-ಕ-ಳು ಎಂಬ ಮೂರು ಶಬ್ದಗಳಿವೆ, ಆದ್ದರಿಂದ ಮಕ್ಕಳು ಮೂರು ಗುರುತು ಬಿಲ್ಲೆಗಳನ್ನು ಹಾಕುತ್ತಾರೆ. ನಂತರ ಒಂದು ಲಕೋಟೆಯೊಳಗಿನ ಬಿಲ್ಲೆಗಳನ್ನು ಒಟ್ಟಿಗೆ ಹಾಕಿ, ಆ ಶಬ್ದಗಳನ್ನು ಸೇರಿಸಿ, ಒಟ್ಟಾರೆ ಪದವನ್ನು ಹೇಳುವಂತೆ ತಿಳಿಸಿ. ಈ ಚಟುವಟಿಕೆಯನ್ನು ಮಾರ್ಪಡಿಸಿ, ಮಕ್ಕಳಿಗೆ ಧ್ವನಿಮಾಗಳ ನಿಟ್ಟಿನಲ್ಲಿ ಪದಗಳನ್ನು ವಿಂಗಡಿಸಲು ಕಲಿಸಬಹುದು.

 **ಇಪ್ಪತ್ತು ಕಾರ್ಡ್‌ಗಳು:** ಮಕ್ಕಳ ಜೋಡಿಗಳಿಗೆ ಇಪ್ಪತ್ತು ಚಿತ್ರಗಳಿರುವ ಕಾರ್ಡುಗಳನ್ನು ನೀಡಿ; ಈ ಇಬ್ಬರೂ, ಒಂದು ಬಾರಿಗೆ ಒಂದೊಂದು ಕಾರ್ಡನ್ನು ಪ್ರದರ್ಶಿಸುತ್ತಾರೆ. ಯಾರ ಬಳಿಯಿರುವ ಕಾರ್ಡಿನಲ್ಲಿ ಹೆಚ್ಚು ಶಬ್ದಗಳಿರುತ್ತವೆಯೋ ಅವರು ಅದರ ಜೊತೆಯ ಕಾರ್ಡನ್ನು ತೆಗೆದುಕೊಳ್ಳುತ್ತಾರೆ. ಪ್ರಾರಂಭದಲ್ಲಿ ಮಕ್ಕಳಿಗೆ ಶಬ್ದಗಳ ಸಂಖ್ಯೆಗಳನ್ನು ಗುರುತಿಸಲು ಸಹಾಯಮಾಡಬೇಕಾಗಬಹುದು, ಆದರೆ ಅವರು ಬಲು ಬೇಗನೇ ಕಲಿತುಕೊಳ್ಳುತ್ತಾರೆ. ಕೊನೆಯಲ್ಲಿ ಯಾರ ಬಳಿ ಹೆಚ್ಚು ಕಾರ್ಡುಗಳಿರುವುದೋ ಅವರು ಗೆಲ್ಲುತ್ತಾರೆ. ಈ ಆಟವನ್ನು ಮಕ್ಕಳಿಗೆ ಉಚ್ಚಾರಾಂಶಗಳನ್ನು ಅಥವಾ ಅಕ್ಷರಗಳನ್ನು ಎಣಿಸುವುದನ್ನು ಕಲಿಸಲು ಉಪಯೋಗಿಸಬಹುದು.

 **ಚಿತ್ರಗಳನ್ನು ವಿಂಗಡಿಸುವುದು**: ಮಕ್ಕಳ ಜೋಡಿಯು, ಚಿತ್ರಗಳ ಕಾರ್ಡ್‌ಗಳ ಸಮುಚ್ಚಯವೊಂದನ್ನು ಬೇರೆ ಬೇರೆ ಶಬ್ದಗಳ ಗುಂಪುಗಳಾಗಿ ವಿಂಗಡಿಸುತ್ತಾರೆ. ಉದಾಹರಣೆಗೆ, "ಕಮಲ" ಎಂಬ ಪದದಲ್ಲಿ /ಕ/, /ಮ/, /ಲ/ ಎಂಬ ಮೂರು ಹಾಗೂ, "ಮರಗಳು" ಎಂಬ ಪದದಲ್ಲಿ /ಮ/, /ರ/, /ಗ/, /ಳು/ ಎಂಬ ನಾಲ್ಕು ಧ್ವನಿಮಾಗಳಿವೆ. ಇದಕ್ಕೆ ಪರ್ಯಾಯವಾಗಿ, ಕಾರ್ಡುಗಳನ್ನು

ಒಂದು ಚೀಲದಲ್ಲಿ ಹಾಕಿ, ತರಗತಿಯ ಸುತ್ತಲೂ ನಡೆಯುತ್ತಾ ಪ್ರತಿ ಮಗುವೂ ಒಂದು ಕಾರ್ಡನ್ನು ಆಯ್ದುಕೊಳ್ಳುವಂತೆ ತಿಳಿಸಿ. ಕೊನೆಯಲ್ಲಿ, ತಮ್ಮ ಕಾರ್ಡಿನಲ್ಲಿರುವ ಸಂಖ್ಯೆಯಷ್ಟೇ ಅಕ್ಷರಗಳನ್ನು ಹೊಂದಿರುವ ಕಾರ್ಡುಗಳಿರುವ ಮಕ್ಕಳು ಒಂದೊಂದು ಗುಂಪನ್ನು ರೂಪಿಸಿಕೊಳ್ಳುತ್ತಾರೆ.

**ಶಬ್ದಗಳನ್ನು ಕುಶಲತೆಯಿಂದ ಬಳಸುವುದು:**

ಇದು ಹೊಸ ಪದಗಳನ್ನು ರಚಿಸಲು ಶಬ್ದಗಳನ್ನು ಸೇರಿಸುವುದು, ತೆಗೆಯುವುದು ಅಥವಾ ಬದಲಾಯಿಸುವುದನ್ನೊಳಗೊಂಡಿದೆ. ಮಕ್ಕಳು ಗ್ರಹಣಶೀಲ ಮತ್ತು ಯುಕ್ತಿಪೂರ್ಣ ವಿಶ್ಲೇಷಣೆಯನ್ನು ಕೈಗೊಳ್ಳುವುದು ಇದಕ್ಕೆ ಅವಶ್ಯ.

- **ಮತ್ತೆ ಹೇಳಿ:** ಆಗ ತಾನೇ ಓದಿದ ಪಠ್ಯದಿಂದ ಪದಗಳನ್ನು ಆಯ್ಕೆಮಾಡಿ. ನೀವು, ಒಂದು ಪದವನ್ನು ಹೇಳಿ. ಅದಕ್ಕೆ ಅಕ್ಷರಗಳನ್ನು ಅಥವಾ ಧ್ವನಿಮಾಗಳನ್ನು ಸೇರಿಸಿ, ತೆಗೆದು ಅಥವಾ ಬದಲಾಯಿಸಿ, ಹೊಸ ಪದಗಳನ್ನು ರಚಿಸಲು ಮಕ್ಕಳಿಗೆ ತಿಳಿಸಿ (ಹೊಸ ಪದವು ಅರ್ಥಪೂರ್ಣವಾಗಿಲ್ಲದಿದ್ದರೂ ತೊಂದರೆ ಇಲ್ಲ).

**ಕೆಲವು ಉದಾಹರಣೆಗಳು:**

**ಬದಲಾಯಿಸುವುದು:** 'ಮಳೆ' ಎಂಬ ಪದದಲ್ಲಿನ 'ಳೆ' ಅಕ್ಷರವನ್ನು 'ನೆ' ಅಕ್ಷರದಿಂದ ಬದಲಾಯಿಸುವಂತೆ ಮಕ್ಕಳಿಗೆ ತಿಳಿಸಿ. ಅದೇ ರೀತಿ 'ಮ' ಅಕ್ಷರವನ್ನು, 'ಬ' ಎಂಬ ಅಕ್ಷರದೊಂದಿಗೆ ಬದಲಾಯಿಸುವಂತೆ ಸೂಚಿಸಿ. ಆಂಗ್ಲ ಭಾಷೆಯಲ್ಲಿ, "cat" ಪದದ ಮಧ್ಯದ ಶಬ್ದವನ್ನು ಬದಲಾಯಿಸಿ, "cet", "cot", "cut" ಇತ್ಯಾದಿ ಹೊಸ ಪದಗಳನ್ನು ರಚಿಸಬಹುದು.

**ಸೇರಿಸುವುದು:** "ಮರ" ಪದದ ಕೊನೆಗೆ "ದ" ಸೇರಿಸಿ, ಹೊಸ ಪದವನ್ನು ಉಚ್ಚರಿಸುವಂತೆ ಮಕ್ಕಳಿಗೆ ತಿಳಿಸಿ.

**ತೆಗೆಯುವುದು:** "ಬರಹ" ಪದದಲ್ಲಿ "ಹ" ಅಕ್ಷರವನ್ನು ತೆಗೆದು, ಹೊಸ ಪದವನ್ನು ಹೇಳುವಂತೆ ಮಕ್ಕಳಿಗೆ ತಿಳಿಸಿ.

ಹಿರಿಯ ಮಕ್ಕಳು ಹೊಸದಾಗಿ ರೂಪಿಸಿದ ಪದಗಳನ್ನು ಒಂದು ಚಾರ್ಟಿನಲ್ಲಿ ದಾಖಲುಮಾಡಿದಲ್ಲಿ, ಪದಗಳಲ್ಲಿ ಶಬ್ದಗಳನ್ನು ಹೇಗೆ ಕುಶಲತೆಯಿಂದ ಬಳಸಿದ್ದೇವೆ ಎಂದು ಸ್ವತಃ ಅವರು ನೋಡಬಹುದು.

**ಧ್ವನಿವಿಜ್ಞಾನದ ಅರಿವನ್ನು ಕುರಿತ ಸೂಚನೆಯ ನಿಯಮಗಳು**

ಈ ಕೈಪಿಡಿಯಲ್ಲಿ ವಿವರಿಸಿದ ಚಟುವಟಿಕೆಗಳನ್ನು ಉಪಯೋಗಿಸುವಾಗ ಮತ್ತು ತಮ್ಮದೇ ಚಟುವಟಿಕೆಗಳನ್ನು ವಿನ್ಯಾಸಗೊಳಿಸುವಾಗ ಶಿಕ್ಷಕರು ಈ ಕೆಳಗಿನ ತತ್ವಗಳನ್ನು ನೆನಪಿಟ್ಟುಕೊಳ್ಳಬೇಕು (ಯೂಪ್ ಮತ್ತು ಯೂಪ್, 2000).

1. ಧ್ವನಿವಿಜ್ಞಾನದ ಅರಿವನ್ನು ಕುರಿತ ಸೂಚನೆಗಳು, ಶಬ್ದದ ಸಣ್ಣ ಘಟಕಗಳನ್ನು ಗುರುತಿಸುವುದರತ್ತ ಗಮನಹರಿಸುವ ಮೊದಲು ದೊಡ್ಡ ಘಟಕಗಳನ್ನು ಗುರುತಿಸುವ ಮತ್ತು ಅವನ್ನು ಕುಶಲತೆಯಿಂದ ಬಳಸುವತ್ತ ಗಮನಹರಿಸಬೇಕು.

2. ಅತ್ಯಂತ ಚಿಕ್ಕ ಮಕ್ಕಳಿಗೆ ಸಂಬಂಧಿಸಿದ ಧ್ವನಿವಿಜ್ಞಾನವನ್ನು ಕುರಿತ ಬಹುತೇಕ ಚಟುವಟಿಕೆಗಳು, ಮಾತಿನ ಶಬ್ದಗಳನ್ನು ಮತ್ತು ಅವುಗಳ ವ್ಯತಾಸಗಳನ್ನು ಗುರುತಿಸಲು, ದೃಶ್ಯ (ಅಂದರೆ ಚಿತ್ರ), ದೇಹದ ಚಲನೆ, ಮತ್ತು ಶಬ್ದಗಳಾದ ಚಪ್ಪಾಳೆ ತಟ್ಟುವುದು, ಜಿಗಿಯುವುದು, ನಾಣ್ಯಗಳೊಂದಿಗಿನ ಎಣಿಕೆ, ಘನಾಕೃತಿ ಇತ್ಯಾದಿಗಳ ಬಳಕೆಯನ್ನೊಳಗೊಂಡ ಸುಳಿವುಗಳನ್ನು ಹೊಂದಿರಬೇಕು.

3. ಮಕ್ಕಳು, ಮಾತಿನ ಶಬ್ದಗಳನ್ನು ಕುಶಲತೆಯಿಂದ ನಿರ್ವಹಿಸುವ ಕಾರಣ, ಹಿರಿಯ ಮಕ್ಕಳಿಗಾಗಿ (6-8 ವರ್ಷದ ಮಕ್ಕಳು), ಕೆಲವು ಚಟುವಟಿಕೆಗಳಲ್ಲಿ ಅಕ್ಷರಗಳನ್ನು ಸೇರಿಸಿಕೊಳ್ಳಬಹುದು. ಇದರಿಂದ ಧ್ವನಿವಿಜ್ಞಾನದ ಅರಿವು ಮತ್ತು ಧ್ವನಿಗಳಿಗೆ ಒತ್ತುಕೊಡಲಾಗುತ್ತದೆ ಮತ್ತು ಲಿಪಿಯನ್ನು ವಿಂಗಡಿಸಿ ಓದುವುದನ್ನು ಕಲಿಯಲು ನೇರವಾಗಿ ಸಹಾಯಮಾಡಿದಂತಾಗುತ್ತದೆ.

4. ಧ್ವನಿವಿಜ್ಞಾನದ ಅರಿವಿನ ಚಟುವಟಿಕೆಗಳು ಮೋಜಿನಿಂದ ಕೂಡಿದ್ದು, ಕಡಿಮೆ ಸಮಯದಲ್ಲಿ ಹಾಗೂ ತರಗತಿಯ ನಿತ್ಯ ಚಟುವಟಿಕೆಗಳ ಭಾಗವಾಗಿ ದಿನದಲ್ಲಿ ಎರಡು, ಮೂರು ಬಾರಿ ಅದರಲ್ಲಿ ತೊಡಗುವಂತಿರಬೇಕಲ್ಲದೆ, ಒಟ್ಟಾರೆ 15-20 ನಿಮಿಷಗಳಿಗಿಂತ ಹೆಚ್ಚು ಸಮಯ ತೆಗೆದುಕೊಳ್ಳಬಾರದು.

ಈ ಕೈಪಿಡಿಯಲ್ಲಿ, ಧ್ವನಿವಿಜ್ಞಾನದ ಅರಿವಿನ ವಿವಿಧ ಅಂಶಗಳನ್ನು ಬೆಳೆಸಲು ಕೆಲವು ಮಾದರಿ ಚಟುವಟಿಕೆಗಳನ್ನು ಮಾತ್ರ ಕೊಡಲಾಗಿದೆ. ಶಿಕ್ಷಣ ಸಂಬಂಧಿತ ಸೂಚನೆಗಳನ್ನು ಗಮನದಲ್ಲಿಟ್ಟುಕೊಂಡು, ತಮ್ಮ ವಿದ್ಯಾರ್ಥಿಗಳಲ್ಲಿ ಧ್ವನಿವಿಜ್ಞಾನದ ಅರಿವಿನ ವಿವಿಧ ಅಂಶಗಳನ್ನು ಮತ್ತಷ್ಟು ಬಲಪಡಿಸಲು ಶಿಕ್ಷಕರು ಬೇರೆ ಬೇರೆ ಚಟುವಟಿಕೆಗಳನ್ನು ಮಾಡಬಹುದು. ಈ ಚಟುವಟಿಕೆಗಳು ಶೀಘ್ರವಾಗಿ ನಿರ್ವಹಿಸುವಂತಿದ್ದು, ಮೋಜಿನಿಂದ ಕೂಡಿರಬೇಕಲ್ಲದೆ, ಮಕ್ಕಳು ಆಸಕ್ತಿಯಿಂದ ಪಾಲ್ಗೊಳ್ಳುವಂತಿರಬೇಕು, ಅತ್ಯಂತ ಮುಖ್ಯವಾಗಿ, ಓದುವ ಮತ್ತು ಬರೆಯುವ ಇತರ ವೈವಿಧ್ಯಮಯ ಚಟುವಟಿಕೆಗಳನ್ನು ಒಳಗೊಂಡಿರಬೇಕು.

ಪರಾಮರ್ಶನೆಗಳು:

Ellery, V. (2014). *Creating Strategic Readers: Techniques for Supporting Rigorous Literacy Instruction*. California: Shell Education.

Yopp, H. K., & Yopp, R. H. (2000). Supporting Phonemic Awareness Development in the classroom. *The Reading Teacher*, *54*, 130–143.

ಲೇಖಕರು: ಹರ್ಷಿತಾ ವಿ. ದಾಸ್, ಅಖಿಲಾ ಪೈದಾ

ಪರಿಕಲ್ಪನೆ ಮತ್ತು ಸಂಪಾದನೆ: ಶೈಲಜ ಮೆನನ್

ಕರಡು ತಿದ್ದುವಿಕೆ: ಚೇತನಾ ದಿವ್ಯ ವಾಸುದೇವ್

ರೂಪರೇಷೆ ಮತ್ತು ವಿನ್ಯಾಸ: ಹರ್ಷಿತ ವಿ. ದಾಸ್